# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1016 (1005)

ಸದಸ್ಯರ ಹೆಸರು : ಶ್ರೀ ಬಿ.ಜಿ.ಪಾಟೀಲ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವವರು : ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

ಉತ್ತರಿಸುವ ದಿನಾಂಕ : 21.09.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಕಲಬುರಗಿ ಜಿಲ್ಲೆ, ಚಿತ್ತಾಪುರ ತಾಲ್ಲೂಕು, ಮೊಗ್ಲ ಗ್ರಾಮದಲ್ಲಿ ಮೆ.ಜೆ.ಎಸ್.ಡಬ್ಲ್ಯೂ ಸಿಮೆಂಟ್ ಲಿಮಿಟೆಡ್ ಇವರು ಸುಣ್ಣದಕಲ್ಲು ಗಣಿಗಾರಿಕೆ ಹಾಗೂ ಸಿಮೆಂಟ್ ಕಾರ್ಖಾನೆ ನಿರ್ಮಿಸಲು 5 ವರ್ಷಗಳ ಹಿಂದೆ ಸದರಿ ಗ್ರಾಮದಲ್ಲಿ ಹಾಗೂ ಸುತ್ತಮುತ್ತಲಿನ ರೈತರ ಜಮೀನನ್ನು ಖರೀದಿಸಲು ಮುಂದಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ದಿನಾಂಕ 06.09.2012 ರಂದು ನಡೆದ 29ನೇ ರಾಜ್ಯ ಉನ್ನತ ಮಟ್ಟದ ಒಪ್ಪಿಗೆ ನೀಡಿಕೆ ಸಮಿತಿ ಸಭೆಯಲ್ಲಿ 4.30 ಎಂಟಿಪಿಎ ಸಾಮರ್ಥ್ಯದ ಸಿಮೆಂಟ್ ಕಾರ್ಖಾನೆಯನ್ನು ಸ್ಥಾಪಿಸಲು ಕಲಬುರಗಿ ಜಿಲ್ಲೆ ಚಿತ್ತಾಪುರ ತಾಲ್ಲೂಕು ಮೊಗ್ಲ ಗ್ರಾಮದಲ್ಲಿ ಮೆ:ಜೆ.ಎಸ್.ಡಬ್ಲ್ಯೂ ಸಿಮೆಂಟ್ ಲಿಮಿಟೆಡ್ ಸಂಸ್ಥೆಗೆ ಅನುಮೋದನೆ ನೀಡಲಾಗಿದ್ದು, ಯೋಜನೆಗಾಗಿ 171 ಎಕರೆ ಜಮೀನನ್ನು ರೈತರ ಒಪ್ಪಿಗೆಯೊಂದಿಗೆ ಕೆ.ಐ.ಎ.ಡಿ.ಬಿ.ಯಿಂದ ವಶಪಡಿಸಿ ಕಂಪನಿಗೆ ಹಸ್ತಾಂತರಿಸಲು ಅನುಮೋದನೆ ನೀಡಲಾಗಿರುತ್ತದೆ. |
| ಆ | ಸದರಿ ಕಂಪನಿಯವರು ಇದುವರೆವಿಗೂ ಕಾರ್ಖಾನೆ ಸ್ಥಾಪಿಸಲು ಮುಂದಾಗದಿರಲು ಕಾರಣವೇನು; (ಸಂಕ್ಷಿಪ್ತ ವಿವರ ನೀಡುವುದು) | ಕಂಪನಿಯಿಂದ ಲಭ್ಯವಿರುವ ಮಾಹಿತಿ ಪ್ರಕಾರ ಗಣಿ ಗುತ್ತಿಗೆಯ ಸಂಬಂಧ ಮಾನ್ಯ ಉಚ್ಚ ನ್ಯಾಯಾಲಯದ ತೀರ್ಪಿಗಾಗಿ ಕಾಯುತ್ತಿರುವುದಾಗಿ ತಿಳಿಸಿರುತ್ತಾರೆ. |
| ಇ | ರಾಜ್ಯದಲ್ಲಿ ಕೈಗಾರಿಕೆಗಳನ್ನು ನಿರ್ಮಿಸಲು ಉದ್ದಿಮೆದಾರರು ಮುಂದೆ ಬಂದಲ್ಲಿ, ಸರ್ಕಾರದಿಂದ ಸಿಗುವ ಸೌಲಭ್ಯಗಳಾವುವು? (ಸಂಪೂರ್ಣ ವಿವರ ನೀಡುವುದು) | ರಾಜ್ಯದಲ್ಲಿ ಸಮಗ್ರ ಕೈಗಾರಿಕಾಭಿವೃದ್ಧಿಗೆ ನೂತನ ಕೈಗಾರಿಕಾ ನೀತಿ 2020-25ನ್ನು ದಿನಾಂಕ 13.08.2020 ರಿಂದ ಜಾರಿಗೆ ತರಲಾಗಿದೆ. ಸದರಿ ನೀತಿಯಡಿ ರಾಜ್ಯದಲ್ಲಿ ಬಂಡವಾಳ ಹೂಡುವ ಕೈಗಾರಿಕೆಗಳಿಗೆ ಈ ಕೆಳಕಂಡ ಪ್ರೋತ್ಸಾಹ ಮತ್ತು ರಿಯಾಯಿತಿಗಳನ್ನು ನೀಡಲು ಅವಕಾಶ ಕಲ್ಪಿಸಿದೆ.<br>1. ಮುದ್ರಾಂಕ ಶುಲ್ಕ ವಿನಾಯಿತಿ ಮತ್ತು ನೋಂದಣಿ ಶುಲ್ಕ ರಿಯಾಯಿತಿ.<br>2. ಭೂ ಪರಿವರ್ತನಾ ಶುಲ್ಕ ಮರುಪಾವತಿ.<br>3. ವಹಿವಾಟಿನ ಮೇಲೆ ಬಂಡವಾಳ ಹೂಡಿಕೆ ಸಹಾಯಧನ.<br>4. ಇಟಿಪಿ ಘಟಕ ಸಹಾಯಧನ.<br>5. ಅಂಕರ್ ಘಟಕ ಸಹಾಯಧನ.<br>6. ಎಂಎಸ್‌ಎಂಇಗಳಿಗೆ ವಿದ್ಯುತ್‌ಚ್ಛಕ್ತಿ ತೆರಿಗೆ ವಿನಾಯಿತಿ |

ಸಿಐ 276 ಎಸ್‌ಪಿಐ 2021

(ಮುರುಗೇಶ ಆರ್. ನಿರಾಣಿ)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು